ಎಂ.ಎಂ. ಮೀನಾಕ್ಷಿ

# ಇಮ್ಮಡಿ ಹರಿಹರನ ಬೇಲೂರಿನ ಅಪೂರ್ವ ಶಾಸನ

ವಿಜಯನಗರ ದೊರೆ ಇಮ್ಮಡಿ ಹರಿಹರನ ಕಾಲಕ್ಕೆ ಸೇರಿದ ಈ ತಾಮ್ರ ಶಾಸನ ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿದೆ.[1] ಇದರ ಕಾಲ ಶಕ 1304, ದುಂದುಭಿ ಕಾರ್ತಿಕ ಬಹುಳ ದಶಮಿ. ಇದು ಕ್ರಿ.ಶ. 1382, ನವೆಂಬರ್ ಒಂದಕ್ಕೆ ಸರಿಹೊಂದುತ್ತದೆ. ಈ ಶಾಸನದಲ್ಲಿ ರಾಜಕೀಯವಾದ ಮಹತ್ವವಾದ ವಿಷಯವೇನೂ ಕಾಣಬರುವುದಿಲ್ಲ. ಆದರೆ ಇದು ಸಾಂಸ್ಕೃತಿಕ ಇತಿಹಾಸ ಹಾಗೂ ಆರ್ಥಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಆದುದರಿಂದ ಅದನ್ನು ಇಲ್ಲಿ ಗಮನಿಸಿ ಇದರ ಪ್ರಾಮುಖ್ಯವನ್ನು ವಿವರಿಸಲಾಗಿದೆ[2]. ಇಮ್ಮಡಿ ಹರಿಹರನ ಮಹಾಪ್ರಧಾನ ಮುದಯ ದಂಡ ನಾಯಕನನ್ನು ಇದು ಹೆಸರಿಸುತ್ತದೆ. ಹಾಗೂ ಆತನಿಗೆ ಸ್ಥಳೀಯ ಸಂಸ್ಥೆಗಳಾದ ನಕರ, ಮುಮ್ಮುರಿದಂಡ, ಹಲರು ಮುಂತಾದವು ಹಂಪೆಯ ವಿರೂಪಾಕ್ಷನ ಸಾನ್ನಿಧ್ಯದಲ್ಲಿ ಸಭೆ ಸೇರಿ, ಪೃಥ್ವೀಶೆಟ್ಟಿ ಎಂಬ ಬಿರುದನ್ನು ಕೊಟ್ಟು ಅವನಿಗೆ ಊರಿನ ಅನೇಕ ತೆರಿಗೆಗಳನ್ನು ಸ್ವಾಮ್ಯವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ. ಅಂದರೆ ಅದರ ಉಪಯೋಗಕ್ಕಾಗಿ ಈ ಸಂಸ್ಥೆಗಳು ಅವನಿಗ ಕೊಟ್ಟ ತೆರಿಗೆ ವಿವರಗಳೇ ಈ ಶಾಸನದ ಮುಖ್ಯಾಂಶ.

ಇಲ್ಲಿ ಇನ್ನೊಂದು ಸ್ವಾರಸ್ಯಕರ ಹಾಗೂ ಮುಖ್ಯ ವಿಷಯವನ್ನು ಗಮನಿಸಬೇಕು. ಶಾಸನ ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದೆ. ಶಾಸನದ ಪ್ರಾರಂಭ, ವಂಶಾವಳಿಗಳು ಸಂಸ್ಕೃತದಲ್ಲಿದ್ದು, ದಾನದ ವಿವರಗಳು ಮಾತ್ರ ಕನ್ನಡದಲ್ಲಿವೆ. ಸಮಸ್ತ ಜನಗಳಿಗೂ ಈ ದಾನದ ವಿವರಗಳು ತಿಳಿಯಬೇಕು ಎನ್ನುವ ಉದ್ದೇಶದಿಂದ, ಈ ಭಾಗವನ್ನು ಕರ್ಣಾಟ ಭಾಷೆಯಲ್ಲಿ ಬರೆದಿರುವುದಾಗಿ ಈ ಶಾಸನವೇ ತಿಳಿಸುತ್ತದೆ. (ಸರ್ವಜನ ವಿಜ್ಞಾನಾಯ ಕರ್ಣಾಟ ಭಾಷೆಯಾಂ ಲಿಖ್ಯತೇ)[3]. ಇದೊಂದು ಮಹತ್ವದ ವಿಷಯ. ಅಂದರೆ ಸಾಮಾನ್ಯ ಜನಗಳಿಗೆ ಸಂಸ್ಕೃತ ಅರ್ಥವಾಗುತ್ತಿರಲಿಲ್ಲ. ಆದುದರಿಂದ ಅವರಿಗಾಗಿ ಈ ವಿಷಯಗಳನ್ನು ಕರ್ಣಾಟ ಭಾಷೆ ಅಂದರೆ ಕನ್ನಡ ಭಾಷೆಯಲ್ಲಿ ಬರೆಸಬೇಕು ಎನ್ನುವ ಪರಿಜ್ಞಾನ ಈಗ್ಗೆ 700 ವರ್ಷಗಳ ಹಿಂದೆ ಇದ್ದ ವಿಜಯನಗರ ಸರಕಾರದ ಅಧಿಕಾರಿಗಳಿಗೆ ಇದ್ದಿತು ಎಂಬುದು ಶ್ಲಾಘನೀಯವಾದ ಮತ್ತು ಇಂದಿಗೂ ಅನುಕರಣೀಯವಾದ ವಿಷಯ

ಇನ್ನು ಕೊಟ್ಟ ಸ್ವಾಮ್ಯದ ವಿಷಯ ಬಹಳ ವಿವರವಾಗಿ ಹೇಳಿದೆ: ನಗದು ಗುತ್ತಗೆಯ ಗ್ರಾಮಗಳಿಗೆ ಒಂದು ಗದ್ಯಾಣಕ್ಕೆ ಒಂದು ಬೇಳೆ, ವಾರದ ಗ್ರಾಮಗಳಿಗೆ 1 ಗದ್ಯಾಣಕ್ಕೆ 1 ಬೇಳೆ, ಹಣವನ್ನು ತೆರಿಗೆಯಾಗಿ ಕೊಡುವ ಗ್ರಾಮಗಳಿಗೆ 1 ಗದ್ಯಾಣಕ್ಕೆ 1 ಬೇಳೆ, ಭತ್ತ ಮುಂತಾದವುಗಳಿಗೆ ಪ್ರತಿ ಖಂಡುಗಕ್ಕೆ ಒಂದು ಬಳ್ಳ, ವಜ್ರ ವೈಢೂರ್ಯ ಮುಂತಾದವುಗಳಿಗೆ 100 ಗಕ್ಕೆ 2 ಪಣ. ಅನಂತರ ಸುಗಂಧದ್ರವ್ಯಗಳನ್ನು ವಿವರಿಸಲಾಗಿದೆ: ಒಂದು ಕಟ್ಟು ಕರ್ಪೂರದ ಕೂರು ಮತ್ತು ಪನ್ನೆಕೂರುಗಳಿಗೆ ಒಂದು ಹಾಗ, ಒಂದು ತೊಲ ಕಸ್ತೂರಿಗೆ 1 ಬೇಳೆ – ಒಂದು ಪನ್ನು(?) ಕೇಸರಿಗೆ 1 ಹಾಗ, ಒಂದು ತೊಲ ಪುನುಗಿಗೆ ಒಂದು ಬೇಳೆ, ಒಂದು ತೊಲ ಶ್ರೀಗಂಧಕ್ಕೆ 1 ಅಡ್ಡ, ಒಂದು ತೊಲ ಅಗಿಲಿಗೆ ಅರ್ಧ ಅಡ್ಡ, ಮೂರು ಕಣಂಜು ತೂಕದ ಸಾಂದುವಿಗೆ 1 ಹಾಗ.

ಈ ಮೇಲಿನ ಪದಾರ್ಥಳಿಂದೆ ತಿಳಿಯುವ ಅಂಶವೆಂದರೆ ಭತ್ತ ಮುಂತಾದ ದವಸ ಧಾನ್ಯಗಳನ್ನು ಖಂಡುಗದಲ್ಲಿ ಅಳೆಯುತ್ತಿದ್ದರು. ಕಸ್ತೂರಿ, ಕೇಸರಿ, ಪುನುಗು ಮುಂತಾದ ವಸ್ತುಗಳನ್ನು ತೊಲದಿಂದ ತೂಗುತ್ತಿದ್ದರು. ಹಾಗೆಯೇ ಕಣಂಜು ಅಥವಾ ಕಳಿಂಜು ಅನ್ನುವುದು ನಾಣ್ಯವಾಗಿರದೆ, ತೂಕವಾಗಿದ್ದಿತೆಂದೂ ಗೊತ್ತಾಗುತ್ತದೆ. ಇಷ್ಟೊಂದು ಸುಗಂಧದ್ರವ್ಯಗಳ ವ್ಯಾಪಾರ – ವಿನಿಮಯ ಇಲ್ಲಿ ಆಗುತ್ತಿದ್ದಿತೆಂದೂ ತಿಳಿಯುತ್ತದೆ. ಅಂದರೆ ಹೆಚ್ಚು ಹಣವನ್ನು ಕೊಟ್ಟು ಈ ವಸ್ತುಗಳನ್ನು ಕೊಳ್ಳುವ ಶ್ರೀಮಂತರಿದ್ದರೆಂದೂ ಇದರಿಂದ ವ್ಯಕ್ತವಾಗುತ್ತದೆ.

ಇದಾದನಂತರ ಶಾಸನದಲ್ಲಿ ಬಟ್ಟೆಗಳ ವಿಷಯ ಪ್ರಸ್ತಾಪಿತವಾಗಿದೆ. ಒಂದು ಜೊತೆ ದೇವಗಿರಿ ಬಟ್ಟೆಗೆ 1 ಬೇಳೆ – ಇಲ್ಲಿ ದೇವಗಿರಿ ಬಟ್ಟೆಯೆಂದರೆ ಏನು

ಎಂದು ಖಚಿವಾಗಿ ಗೊತ್ತಾಗುವುದಿಲ್ಲ. ಸೇವುಣರ ರಾಜಧಾನಿಯಾಗಿದ್ದ ದೇವಗಿರಿಯು ಬಹಳ ಮೃದುವಾದ ಬಟ್ಟೆಗೆ ಪ್ರಸಿದ್ಧಿಯಾಗಿದ್ದಿತು. ಅದುದರಿಂದ ಅಲ್ಲಿಂದ ಬಂದ ಬಟ್ಟೆಯನ್ನು ದೇವಗಿರಿ ಬಟ್ಟೆಯೆಂದು ಕರೆಯುತ್ತಿದ್ದಿರ ಬಹುದು ಎಂದು ಊಹಿಸಬಹುದು.

ಮದುವೆಯ ಬಟ್ಟೆಯ ಜೊತೆಗೆ 1 ವೀಸ, ಉಬ್ಬೆಗೆ ಹಾಕಿದ ಬಟ್ಟೆ 80 ಮೊಳಕ್ಕೆ 1 ಅಡ್ಡ ಅಂದರೆ ಹೊಲಿಯದ ಬಟ್ಟೆಯನ್ನು ಮೊಳಗಳಲ್ಲಿ ಅಳೆಯುತ್ತಿದ್ದರೆಂದು ತಿಳಿಯುತ್ತದೆ. ಪಟ್ಟೆನೂಲು ಅಂದರೆ ರೇಷ್ಮೆ ನೂಲಿಗೆ ತೊಲಕ್ಕೆ ಒಂದು ಅಡ್ಡ – ಅಂದರೆ ರೇಷ್ಮೆಯ ನೂಲನ್ನು ತೊಲದಲ್ಲಿ ತೂಗುತ್ತಿದ್ದರು, ಅದೇ ರೀತಿಯಲ್ಲಿ ರೇಷ್ಮೆ ಬಟ್ಟೆಯನ್ನೂ ತೊಲದಲ್ಲಿ ತೂಗುತ್ತಿದ್ದರು. ದಾಸರಿ ಎಂಬ ರೇಷ್ಮೆ ಬಟ್ಟೆಗೆ ತೊಲಕ್ಕೆ 1 ಹಾಗ – ಒಂದು ಮಳವಿ ಹತ್ತಿಗೆ 1 ಹಾಗ, ಇಲ್ಲಿ ಮಳವಿ ಎನ್ನುವುದು ತೂಕದ ಬಟ್ಟು. ಒಂದು ಮಳವಿ ಉಣ್ಣೆಯ ಹೊದಿಕೆಗಳಿಗೆ 1 ಹಾಗ, ಒಂದು ಕಾಗೆಯ ಪಟ್ಟೆಗೆ 1 ವೀಸ – ಇಲ್ಲಿ ಕಾಗೆಯ ಪಟ್ಟೆ ಎಂದರೆ ಕರಿಯ ಬಟ್ಟೆ ಅಥವಾ ಒರಟು ಬಟ್ಟೆ ಎಂದು ಅರ್ಥಮಾಡಬಹುದು. ರತ್ನಗಂಬಳಿ ಮತ್ತು ಜಮಖಾನೆ ಒಂದು ಮಳವಿಗೆ 1 ಹಾಗ – ಜಮಖಾನದ ಉಲ್ಲೇಖ ಇಲ್ಲಿ ಗಮನಿಸ ಬೇಕಾದುದು. ಒಂದು ಮಳವೆ ಓಲಿಗರಿಗೆ 1 ಹಾಗ – ಓಲಿಗರಿಯೂ ವಿಶೇಷವಾಗಿ ಮಾರಾಟ ವಾಗುತ್ತಿದ್ದ ವಸ್ತುವಾಗಿದ್ದಿತೆಂದು ಗಮನಿಸಬೇಕು. ಒಂದು ಮಳವೆ ಗೋಣಿಚೀಲಕ್ಕೆ 1 ಹಾಗ. ಆಗಿನ ಕಾಲದಲ್ಲಿಯೂ ಗೋಣಿಚೀಲವನ್ನು ಉಪಯೋಗಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಈ ಮೇಲಿನ ಅಳತೆಗಳಲ್ಲಿ ಮಳವೆ ಅಥವಾ ಮಳವಿ ಎಂಬ ಪದವನ್ನು ಉಪಯೋಗಿಸಲಾಗಿ ಅದರ ಸರಿಯಾದ ಅರ್ಥ ತಿಳಿದಿಲ್ಲ. ಅನಂತರ ದವಸ ಧಾನ್ಯಗಳ ವಿವರಗಳು ಹೇಳಲ್ಪಟ್ಟಿವೆ. ಭತ್ತ, ಜೋಳ, ರಾಗಿ, ನವಣೆ, ಬರಗು, ಸಾವೆ ಮುಂತಾದ ಧಾನ್ಯಗಳಿಗೆ ಹೇರು 1 ಕ್ಕೆ ಬೇಳೆ 1. ಗೋಧಿ, ಕಡಲೆ, ಎಳ್ಳು, ಅಗಸೆ, ಕುಸುಬೆ, ಹೆಸರು, ಉದ್ದು, ತೊಗರಿ ಈ ಧಾನ್ಯಗಳಿಗೆ 1 ಹೇರಿಗೆ 1 ಹಾಗ, ಅಕ್ಕಿ ಹೇರೊಂದಕ್ಕೆ 1 ಬೇಳೆ. ಎಣ್ಣೆ ಮತ್ತು ತುಪ್ಪಗಳಿಗೆ ಒಂದು ಹೇರಿಗೆ ಒಂದು ಅಡ್ಡ. ಇಲ್ಲಿ ಒಂದು ಹೇರು ಉಪ್ಪಿಗೆ 1 ಬೇಳೆ, ಬೆಲ್ಲ ಹೇರಿಗೆ 1 ಹಾಗ, ಸಕ್ಕರೆ ಒಂದು ಹೇರಿಗೆ ಅಡ್ಡ – ಇಲ್ಲಿ ಬೆಲ್ಲ ಮತ್ತು ಸಕ್ಕರೆಗಳನ್ನು ಬೇರೆಯಾಗಿ ಹೆಸರಿಸಿರುವುದನ್ನು ಗಮನಿಸಬೇಕು. ಒಂದು ಹೇರು ಅಡಕೆಗೆ 1 ಹಾಗ, ವಿಳ್ಯೇದೆಲೆಯ ಹೇರು ಒಂದಕ್ಕೆ 1 ಹಾಗ.

ಇತರ ವಸ್ತುಗಳೆಂದರೆ ಕರಿಮೆಣಸು, ಅರಿಶಿನ, ಈರುಳ್ಳಿ, ಜೀರಿಗೆ, ಮೆಂತ್ಯ, ಸಬ್ಬಸಿಗೆ, ಸಾಸುವೆ, ಶುಂಠಿ ಇವುಗಳಿಗೆ ಒಂದು ಹೇರಿಗೆ 1 ಹಾಗ; ಈ ಮೇಲಿನ ಎಲ್ಲ ವಸ್ತುಗಳನ್ನೂ ಹೊರೆಯ ರೂಪದಲ್ಲಿ ಅಳಿಯಲಾಗುತ್ತಿದ್ದಿತು. ಅದರ ಮೇಲೆ ತೆರಿಗೆ ಹಾಕಲ್ಪಟ್ಟಿತ್ತು. ಇದರಲ್ಲಿ ಈರುಳ್ಳಿ ಅಥವಾ ಬೆಳ್ಳುಳ್ಳಿಯ ಪ್ರಸ್ತಾಪ ಬಂದಿರುವುದು ಕುತೂಹಲ ಕಾರಿಯಾದುದು. 'ಲೋಕೋಪಕಾರ'ದಲ್ಲಿ ಅದರ ಪ್ರಸ್ತಾಪವಿದೆ. ಅದರೆ ಶಾಸನಗಳಲ್ಲಿ ಇದರ ಉಲ್ಲೇಖ ವಿರಳ. ಆದರೆ ಕಬ್ಬನ್ನು ಹಾಗೂ ತೆಂಗಿನಕಾಯಿ ಯನ್ನು ಹೇಳುವಾಗ ಒಂದು ಬಂಡಿಗೆ ಒಂದು ಹಾಗ ತೆರಿಗೆ ಹಾಕಲಾಗಿತ್ತು. ಮೋಲೋಗರ ಮಾಡುವ ತರಕಾರಿಯನ್ನೂ ಇಲ್ಲಿ ಒಂದು ಬಂಡಿಗೆ 1 ಹುಲುವೀಸ ತೆರಿಗೆ. ಹುಲುವೀಸ ಎನ್ನುವ ನಾಣ್ಯವನ್ನು ಇದುವರೆವಿಗೂ ನಾಣ್ಯಶಾಸ್ತ್ರಜ್ಞರು ಗಮನಿಸಿಲ್ಲ[4]. ಬಹುಶಃ ಇದು ವೀಸದ ಒಂದು ಭಾಗವಿರಬೇಕೆಂದು ಮಾತ್ರ ಹೇಳಬಹುದು. ಇದರ ನಿಜವಾದ ಮೌಲ್ಯ ಗೊತ್ತಾಗಿಲ್ಲ.

ಸಂತೆ ಮುಂತಾದ ಸಮಯಗಳಲ್ಲಿ ರಸ್ತೆಯಲ್ಲಿ ಇಟ್ಟು ಮಾರುವ ಕೆಲವು ವಸ್ತುಗಳ ಮೇಲೂ ಇಲ್ಲಿ ತೆರಿಗೆ ಹಾಕಿರುವುದು ಗಮನಾರ್ಹ. ಇಂತಹ ವಿಳ್ಯದೆಲೆ ಅಂಗಡಿಗೆ ಒಂದು ದಿನಕ್ಕೆ ಒಂದು ಎಲೆ; ಅಡಿಕೆಯ ಅಂಗಡಿಗೆ ಒಂದು ದಿನಕ್ಕೆ ಒಂದು ಅಡಿಕೆ; ಒಂದು ಗಾಡಿ ಹೊರೆಯ ಮರಕ್ಕೆ ಒಂದು ಬೇಳೆ; ಹುಲ್ಲು ಮತ್ತು ಸೌದೆ ಹೊರೆ 1ಕ್ಕೆ 1 ಬೇಳೆ. ಇನ್ನು ಪ್ರಾಣಿಗಳನ್ನು ಗಮನಿಸಬಹುದು. ಹೊರಗಡೆಯಿಂದ ಬಂದ ಮಾನ್ಯದ ಎತ್ತಿಗೆ ಒಂದಕ್ಕೆ 1 ಹಾಗ; ಕುದುರೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಹೊಲಿಯ ಕುದುರೆ, ಖಡಿಲೆಯ ಕುದುರೆ ಮತ್ತು ನಾಡಕುದುರೆ – ಇವುಗಳಿಗೆ ಇವುಗಳ ಬೆಲೆಯ 1 ಗದ್ಯಾನಕ್ಕೆ 1 ಬೇಳೆ; ಆನೆಗೆ ಮತ್ತು ಒಂಟೆಗಳಿಗೆ 1 ಹಾಗ; ಗಾಡಿಗೆ ಅದರ ಬೆಲೆಯ ಗದ್ಯಾಣಕ್ಕೆ 1 ಬೇಳೆ; ಎಮ್ಮೆಗೆ 1 ಹಾಗ; ಕುರಿ ಮತ್ತು ಆಡುಗಳಿಗೆ 1 ಹುಲುವೀಸ; ಎರಡೂ ಕಡೆಗಳಲ್ಲಿ ಕೊಡಲಾಗುವ ಸುಂಕ ಗದ್ಯಾಣಕ್ಕೆ 1 ಬೇಳೆ; ಪರಿವಾರದ ಒಬ್ಬ ಮನುಷ್ಯನಿಗೆ ಒಂದು ವರ್ಷಕ್ಕೆ 1 ಪಣ. ಅಮರ ಧಂಡನಾಯಕರ ಕಟ್ಟಲೆಗಾಗಿ ಒಂದು ಕುದುರೆಗೆ

ವರ್ಷಕ್ಕೆ 5 ಪಣ. ಅನಂತರ ಜೀವಿತಗಾರರೆಂಬುವರ ವಿಷಯ ಪ್ರಸ್ತಾಪಿತವಾಗಿದೆ. ಪ್ರತಿ ವರ್ಷ ಹತ್ತರಿಂದ ನೂರು ಹೊನ್ನನ್ನು ಸಂಪಾದಿಸುವ ಜೀವಿತಗಾರನು ವರ್ಷಕ್ಕೆ 1 ಪಣ ಕೊಡಬೇಕು; ನೂರಕ್ಕೂ ಹೆಚ್ಚು ಹೊನ್ನು ಸಂಪಾಸುವವನು ಎರಡು ಪಣವನ್ನು ಕೊಡಬೇಕು; ಹಾಗೆಯೇ ರಾಜ ಅಥವಾ ರಾಜಕುಮಾರರಿಂದ ಉಂಬಳಿಗಾಗಿ ನೂರು ಗದ್ಯಾಣಗಳಿಗೆ ಎರಡು ಪಣ. ಇಷ್ಟೆಲ್ಲವನ್ನೂ ಅವರು ಸ್ವಸಂತೋಷದಿಂದ ಮರ್ಯಾದೆಯ ಸ್ವಾಮ್ಯವಾಗಿ ಮುದ್ದಯ ದಂಡನಾಯಕನಿಗೆ ಬಿಟ್ಟುಕೊಟ್ಟರು. ಇಷ್ಟೆಲ್ಲವನ್ನೂ ಒಬ್ಬ ದಂಡನಾಯಕನ ಜೀವನಕ್ಕಾಗಿ ಬಿಟ್ಟು ಕೊಡಬೇಕಾಯಿತು ಎನ್ನುವುದು ಗಮನಾರ್ಹವಾದ ಸಂಗತಿ.

ಈ ಶಾಸನದಲ್ಲಿ ಇನ್ನೊಂದು ಮಹತ್ವವಿದೆ. ವಿಜಯನಗರ ಕಾಲದಲ್ಲಿ ಚಲಾವಣೆಯಲ್ಲಿದ್ದ ಬಹುತೇಕ ನಾಣ್ಯಗಳ ಉಲ್ಲೇಖ ಇಲ್ಲಿ ಬಂದಿದೆ. ಅವುಗಳು ಗದ್ಯಾಣ, ಹೊನ್, ಹಣ, ವೀಸ, ಬೇಳೆ, ಹಾಗ ಮತ್ತು ಹುಲುವೀಸ. ಇಲ್ಲಿ ಅಷ್ಟೊಂದು ವ್ಯವಹಾರಗಳಿದ್ದಾಗ್ಯೂ ವರಹದ ಪ್ರಸ್ತಾಪವೇ ಇಲ್ಲ. ಅದರ ಬದಲು ಗದ್ಯಾಣವಿದೆ. ಅಂದರೆ ವರಹ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದ್ದಿತೇ ಅಥವಾ ಈ ಪ್ರದೇಶದಲ್ಲಿ ಗದ್ಯಾಣವೇ ವಿಶೇಷ ಚಲಾವಣೆಯಲ್ಲಿದ್ದಿತೇ ಎನ್ನುವುದು ನಾಣ್ಯ ಶಾಸ್ತ್ರಜ್ಞರು ನಿರ್ಧರಿಸಬೇಕು.

ಈ ಶಾಸನದಲ್ಲಿ ಕಾಣಸಿಗುವ ಅನೇಕ ದವಸ ಧಾನ್ಯ, ಹೂವುಹಣ್ಣು ಮತ್ತು ಇತರ ಪದಾರ್ಥಗಳು, ಪ್ರಾಚೀನತೆಯ ದೃಷ್ಟಿಯಿಂದಲೂ ಗಮನಾರ್ಹ ತಾಳೆಯನ್ನು ಕುರಿತು ಬರೆಯುವಾಗ ಬಿ.ಜಿ.ಎಲ್. ಸ್ವಾಮಿಯವರು 16ನೆಯ ಶತಮಾನದ ಶಾಸನವನ್ನು ಉದ್ಧರಿಸಿ ತಾಳೆ ತೋಪನ್ನು ಕೊಂಡಿ ಶೆಟ್ಟಿ ಬೆಳೆಸಿದ ಎನ್ನುತ್ತಾರೆ[5]. ಆದರೆ ಈ ಶಾಸನದಲ್ಲಿ ಅದಕ್ಕೂ ಮುಂಚೆಯೇ ತಾಳೆಯ ಎಲೆಯ ಪ್ರಸ್ತಾಪ ಬಂದಿರುವುದು ಗಮನಾರ್ಹ. ಹಾಗೆಯೇ ತೆಂಗಿನ ಬಗೆಗೆ ಬರೆಯುತ್ತಾ ಅವರು ಯಾವ ಶಾಸನವನ್ನೂ ಉದ್ಧರಿಸಿಲ್ಲ. ಅದು ಇಲ್ಲಿ ದೊರೆಯುತ್ತದೆ. ಹಾಗೆಯೇ ಕಡಲೆಯ ಬಗೆಗೆ ಬರೆಯುತ್ತಾ ಕ್ರಿ.ಶ. 1161ರ ಶಾಸನವು ಕಡಲೆಯ ಕಡುಬನ್ನು ಹೆಸರಿಸುತ್ತದೆ, ಎಂದಿದ್ದಾರೆ[6]. ಈ ಶಾಸನದಲ್ಲಿ ಕಡಲೆಯೇ ಉಕ್ತವಾಗಿದೆ. ಅದೇ ರೀತಿ ಕೇಸರಿಯ ವಿಷಯವನ್ನು ಚರ್ಚಿಸುತ್ತ ಒಂದು ಕಾಲವಿಲ್ಲದ ವೀರಪಾಂಡ್ಯದೇವನ ಶಾಸನವನ್ನು ಅವರು ಉಲ್ಲೇಖಿಸಿದ್ದಾರೆ[7]. ಅನೇಕ ವಸ್ತುಗಳಾದ ಸಕ್ಕರೆ, ಶುಂಠಿ, ಪುನುಗು, ಕರ್ಪೂರ ಮುಂತಾದ ಅನೇಕ ವಸ್ತುಗಳಿಗೆ ಈ ಶಾಸನ ಒಂದು ಪ್ರಾಚೀನತೆಯನ್ನು ಒದಗಿಸುತ್ತದೆ. ಹೀಗಾಗಿ ಆ ದೃಷ್ಟಿಯಿಂದಲೂ ಈ ಶಾಸನ ಆಳವಾಗಿ ಅಭ್ಯಾಸಮಾಡಲು ಯೋಗ್ಯವೆನಿಸಿದೆ.

---

## ಟಿಪ್ಪಣಿ

1. ಇದು ಎ.ಕ. ಸಂ. 9, ಸಂಖ್ಯೆ 171ರಲ್ಲಿ ಪ್ರಕಟವಾಗಿದೆ (ಪರಿಷ್ಕೃತ ಆವೃತ್ತಿ; ಮೈಸೂರು ವಿಶ್ವವಿದ್ಯಾನಿಲಯ)
2. ಒಂದು ಶಾಸನ ಎಷ್ಟೊಂದು ಮಾಹಿತಿಯನ್ನು ಕೊಡಬಹುದು ಎನ್ನುವುದಕ್ಕೆ ಇದೊಂದು ಉತ್ತಮ ಉದಾರಣೆ.
3. ಶಾಸನದ ಸಾಲು 40-41
4. ಎ.ವಿ. ನರಸಿಂಹಮೂರ್ತಿ, 'ಕಾಯಿನ್ಸ್ ಆಫ್ ಕರ್ನಾಟಕ', ಪು 142, ಅವರು ಕೊಟ್ಟಿರುವ ಪಟ್ಟಿಯಲ್ಲಿ ಹುಲುವೀಸ ಸೇರಿಲ್ಲ.
5. ಬಿ.ಜಿ.ಎಲ್. ಸ್ವಾಮಿ, 'ಶಾಸನಗಳಲ್ಲಿ ಗಿಡಮರಗಳು' ಪು 18-19
6. ಅದೇ, ಪು.21
7. ಅದೇ ಪು. 32